CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೧೭, ೨೦೦೫ ( ಫಾಲ್ಗುಣ ೨೬ ಶಕ ವರ್ಷ ೧೯೨೬) | ಸಂಚಿಕೆ ೧೧

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಜಲ ಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆ**
**ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ**
**ಸಂ.ಸನೀವಿಗು/ ಯೋಶಾ3/ ಶಂಕರವಾಡಿ/ ಬಿಸಿಬಿ/ ಟೆಂಡರ್/ 2004-05/691, ದಿನಾಂಕ: 4ನೇ ಮಾರ್ಚ್, 2005**
**ಸಂಕ್ಷಿಪ್ತ ಕರಡು ಟೆಂಡರ್ ಪ್ರಕಟಣೆ**
**(ಎರಡು ಲಕೋಟೆ ಪದ್ಧತಿ)**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಿದ ಮೊದಲನೆ ದರ್ಜೆ ಗುತ್ತಿಗೆದಾರರಿಂದ ಕಾರ್ಯ ನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರಿಂದ ಎರಡು ಲಕೋಟೆ ಅಂದರೆ ತಾಂತ್ರಿಕ ಮತ್ತು ಆರ್ಥಿಕ ಬಿಡ್ ಪದ್ಧತಿಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಕಾಮಗಾರಿಯ ವಿವಿರ ಈ ಕೆಳಗೆ ತೋರಿಸಿದ ನಮೂನೆಯಲ್ಲಿ ಇರುತ್ತದೆ.

ಗುತ್ತಿಗೆದಾರರು ಅಂದರೆ ವ್ಯಯಕ್ತಿಕ /ಫರ್ಮ/ ಸಂಯುಕ್ತವಾಗಿ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು/ ಫರ್ಮ ಅಥವಾ ಎರಡೂ ಹೊಂದಿರುವ ಪ್ರಮುಖ ಪಾಲುದಾರರು. ಖಾಲಿ ತಾಂತ್ರಿಕ ಮತ್ತು ಆರ್ಥಿಕ ಬಿಡ್ ದಸ್ತಾವೇಜುಗಳನ್ನು ಕಾರ್ಯ ನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಕಛೇರಿಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಲಿಖಿತ ಅರ್ಜಿ ಮೂಲಕ ನಿಗದಿ ಪಡಿಸಿದ ಇ.ಎಂ.ಡಿ. ಮೊತ್ತವನ್ನು ಡಿ.ಡಿ. ಅಥವಾ ಬ್ಯಾಂಕರ ಚೆಕ್ಕನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಿರಬೇಕು. ಆಯಶಸ್ವಿ ಬಿಡ್‌ದಾರರ ಇ.ಎಂ.ಡಿ. ಮೊತ್ತವನ್ನು ಟೆಂಡರ್ ತೆರೆದ ದಿನಾಂಕದಿಂದ 90 (ತೊಂಬತ್ತು) ದಿನಗಳೊಳಗಾಗಿ ಹಿಂದಿರುಗಿಸಲಾಗುವುದಿಲ್ಲ.

**ಕಾಮಗಾರಿಯ ವಿವರಗಳು**

| ಕ್ರ.ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಖಾಲಿ ಟೆಂಡರ ಫಾರ್ಮಿನ ಬೆಲೆ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ದ್ವಿಪ್ರತಿಗಳು) ಎಲ್ಲಾ ತೆರಿಗೆ ಸೇರಿ (ಹಿಂದಿರುಗಿಸಲಾಗದು) (ರೂ.ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸಬೇಕಾದ ಅವಧಿ (ಮಳೆಗಾಲ ಸೇರಿ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಕಾಗೀಣಾ ನದಿಗೆ ಅಡ್ಡಲಾಗಿ ಶಂಕರವಾಡಿ ಗ್ರಾಮದ ಹತ್ತಿರ ಬ್ಯಾರೇಜ-ಕಮ್- ಬ್ರಿಡ್ಜ್ ನಿರ್ಮಾಣ. | 562.56 | 5.63 | 25,000.00 | ಮೊದಲನೆಯ ದರ್ಜೆ | 18 ಕ್ಯಾಲೆಂಡರ್ ತಿಂಗಳುಗಳು (ಮಳೆಗಾಲ ಸೇರಿ) |

ಎರಡು ಲಕೋಟೆ ಟೆಂಡರ್ ಸಲ್ಲಿಸುವಲ್ಲಿ ತಾಂತ್ರಿಕ ಬಿಡ್ ಭಾಗ-1 ಮತ್ತು ಆರ್ಥಿಕ ಬಿಡ್ ಭಾಗ-2 ಎಂಬ ಪದ್ಧತಿಯನ್ನು ಅನುಸರಿಸುವುದು. ತಾಂತ್ರಿಕ ಬಿಡ್ಡಿನ ಮೌಲ್ಯ ಮಾಪನವನ್ನು ಅರ್ಜಿದಾರರು ಸಲ್ಲಿಸಿರುವ ವಿವರಗಳು ಆಧಾರದ ಮೇಲೆಯೇ ಅರ್ಹತೆಯನ್ನು ಪರಿಗಣಿಸಲಾಗುವುದು.

ಗುತ್ತಿಗೆದಾರರು ಖಾಲಿ ಟೆಂಡರ್ ದಸ್ತಾವೇಜುಗಳನ್ನು ಕಾರ್ಯ ನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಕಛೇರಿಯಿಂದ ಖಾಲಿ ಟೆಂಡರ್ ದಸ್ತಾವೇಜುಗಳಿಗೆ ನಿಗದಿಪಡಿಸಿದ ಮೊತ್ತವನ್ನು (ಹಿಂದಿರುಗಿಸಲಾಗುವುದಿಲ್ಲ) ಸಂದಾಯ ಮಾಡಿ ಲಿಖಿತ ಅರ್ಜಿಯೊಂದಿಗೆ ಇ.ಎಂ.ಡಿ. ಲಗತ್ತಿಸಿ ಪಡೆಯತಕ್ಕದ್ದು.

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ, ಪರಿಶೀಲಿಸಿಕೊಂಡು ಅರ್ಜಿಯ ಜೊತೆಗೆ ಇ.ಎಂ.ಡಿ. ಯೊಂದಿಗೆ ನಕಲು ಪ್ರತಿಗಳು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರನ್ಸ್ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆ ಕ್ಲಿಯರನ್ಸ್ ಪ್ರಮಾಣ ಪತ್ರ.
4. ಋಣ ವಿಮೋಚಿಸುವ ಸಾಲ ಸೌಲಭ್ಯಗಾಗಿ ರೂ. 200.00 ಲಕ್ಷಗಳಿಗೆ ಕಡಿಮೆ ಇಲ್ಲದ ಬ್ಯಾಂಕಿನಿಂದ ಸಾಲವನ್ನು ಕಾಮಗಾರಿಗೆ ಪೂರೈಸುವ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಪ್ರಮಾಣ ಪತ್ರ.
5. ಸ್ವಂತಃ ಅಥವಾ ಲೀಜ ಮೇಲಿನ ಯಂತ್ರೋಪಕರಣಗಳ ಪಟ್ಟಿ (ನಮೂನೆ-5ರ ಪ್ರಕಾರ)
6. ಬ್ಯಾರೇಜ್-ಕಮ್- ಬ್ರಿಡ್ಜ್ ಅಥವಾ ಇಂತಹದೇ ಒಂದು ಕಾಮಗಾರಿಯನ್ನು ಒಂದೇ ಆರ್ಥಿಕ ವರ್ಷದಲ್ಲಿ, ವರ್ಷ 2004-05 ಸಾಲಿನ ದರಗಳಿಗೆ ಹೋಲಿಸಿದಾಗ ಕನಿಷ್ಠ ರೂಪಾಯಿ 1124.00 ಲಕ್ಷಗಳ ಆರ್ಥಿಕ ವಹಿವಾಟು ಮಾಡಿರುವ ಪ್ರಮಾಣ ಪತ್ರ.
7. ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಟ ಪ್ರಮಾಣದ ಕೆಲಸಗಳ ಪ್ರಮಾಣ ಪತ್ರ

| | |
|---|---|
| 1) ಅಗೆತದ ಕೆಲಸ | : 36000.00 ಘ.ಮಿ. |
| 2) ಸಿಮೆಂಟ್ ಕಾಂಕ್ರೀಟ್ ಕೆಲಸ | : 25000.00 ಘ.ಮಿ. |
| 3) ಉಕ್ಕಿನ (ಸ್ಟೀಲ್) ಗೇಟುಗಳು ರಚಿಸುವುದು ಮತ್ತು ಅಳವಡಿಸುವುದು. | : 110.00 ಮೆ.ಟನ್ |
| 4) ಉಕ್ಕು (ಸ್ಟೀಲ್) | : 150.00 ಮೆ.ಟನ್ |

**ಖಾಲಿ ಟೆಂಡರ್ ದಸ್ತಾವೇಜುಗಳಿಗೆ ಹಣ ಸಂದಾಯ ಮಾಡುವ ವಿಧಾನ.**

ಡಿ.ಡಿ. ಅಥವಾ ಬ್ಯಾಂಕರ್ ಚೆಕ್ಕನ್ನು ಕಾರ್ಯ ನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಯಾವುದೇ ಶೆಡ್ಯೂಲ್ಡ್ ಬ್ಯಾಂಕಿನಿಂದ ಸ್ಟೇಟ್‌ಬ್ಯಾಂಕ್ ಆಫ್ ಹೈದ್ರಾಬಾದ್‌ನಲ್ಲಿ ನಗದೀಕರಿಸುವಂತಾಗಿರತಕ್ಕದ್ದು.

**ಟೆಂಡರ್ ದಸ್ತಾವೇಜುಗಳಿಗೆ ಅರ್ಜಿ, ವಿತರಿಸುವ ಹಾಗೂ ಸ್ವೀಕರಿಸುವ ದಿನಾಂಕಗಳು:**

| | | |
|---|---|---|
| 1) | ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ | : 28.03.2005 ಸಾಯಂಕಾಲ 5.30 ಗಂಟೆಯವರೆಗೆ |
| 2) | ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ಕೊನೆಯ ದಿನಾಂಕ | : 04.04.2005 ಸಾಯಂಕಾಲ 5.30 ಗಂಟೆಯವರೆಗೆ |
| 3) | ಭರ್ತಿ ಮಾಡಿದ ಮೋಹರಬಂದ ಟೆಂಡರ್ ದಸ್ತಾವೇಜುಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ | : 12.04.2005 ಸಾಯಂಕಾಲ 4.00 ಗಂಟೆಯ ವರೆಗೆ |
| 4) | ಭರ್ತಿ ಮಾಡಲಾದ ಟೆಂಡರ್‌ಗಳನ್ನು ಈ ಕೆಳಕಾಣಿಸಿದ ಕಾರ್ಯಾಲಯಗಳಲ್ಲಿಯೂ ನಿಗದಿಪಡಿಸಿದ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸಬಹುದು. | : (ಅ) ಕಾರ್ಯ ನಿರ್ವಾಹಕ ಅಭಿಯಂತರರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ.<br>: (ಬ) ಅಧೀಕ್ಷಕ ಅಭಿಯಂತರರವರ ಕಛೇರಿ ಸಣ್ಣ ನೀರಾವರಿ ವೃತ್ತ ಗುಲ್ಬರ್ಗಾ.<br>: (ಕ) ಮುಖ್ಯ ಅಭಿಯಂತರರವರ ಕಛೇರಿ ಸಣ್ಣ ನೀರಾವರಿ ಸಣ್ಣ ನೀರಾವರಿ (ಉ) ವಲಯ ಬಿಜಾಪುರ. |

**ಇ.ಎಮ್.ಡಿ. ಸಲ್ಲಿಸುವ ವಿಧಾನ:**

1. ಇ.ಎಂ.ಡಿ. ಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕರ್ ಚೆಕ್ಕನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಹೆಸರಿಗೆ ಪಡೆದಿರಬೇಕು. ಮಾನ್ಯತೆ ಹೊಂದಿರದ ಇ.ಎಂ.ಡಿ. ಟೆಂಡರಿನೊಂದಿಗೆ ಲಗತ್ತಿಸಿ ಸಲ್ಲಿಸಿದಲ್ಲಿ ಅಂತಹ ಟೆಂಡರ್‌ಗಳನ್ನು ರದ್ದುಗೊಳಿಸಲಾಗುವುದು. ಈ ಇ.ಎಂ.ಡಿ. ಯನ್ನು ಟೆಂಡರ್ ತೆರೆದ ದಿನಾಂಕದಿಂದ 180 (ಒಂದುನೂರಾ ಎಂಬತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು.

**ಲಗತ್ತಿಸುವ ಇತರೆ ಪ್ರಮಾಣ ಪತ್ರಗಳು:**

1. ಈ ಕೆಳಕಂಡ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.
   (ಅ) ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
   (ಬ) ಇತ್ತೀಚಿನ ಇನಕಮ್ ಟ್ಯಾಕ್ಸ್‌ಕ್ಲಿಯರನ್ಸ್ ಪ್ರಮಾಣ ಪತ್ರ.
   (ಕ) ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಕ್ಲಿಯರನ್ಸ್ ಪ್ರಮಾಣ ಪತ್ರ.

ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ಈ ಕಛೇರಿಯಲ್ಲಿ ಟೆಂಡರ್ ಸ್ವೀಕರಿಸುವ ದಿನದ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು. (ಅರ್ಜಿಯ ಜೊತೆ ಲಗತ್ತಿಸಿದ ಹಾಗೂ ತಾಂತ್ರಿಕ ಬಿಡ್ಡಿಗೆ ಲಗತ್ತಿಸುವ ಪ್ರಮಾಣ ಪತ್ರಗಳು ಒಂದೆಯಾಗಿರತಕ್ಕದ್ದು. ಇರದ ಪಕ್ಷದಲ್ಲಿ ಟೆಂಡರ್ ದಾಸ್ತಾವೇಜುಗಳು ತಿರಸ್ಕರಿಸಲಾಗುವುದು.)

1) ತಾಂತ್ರಿಕ ಬಿಡ್ಡುಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯ ನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಕಛೇರಿಯಲ್ಲಿ ನಮೂದಿಸಿದ ದಿನಾಂಕದಂದು ಅಥವಾ ಸಾಧ್ಯವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಕಛೇರಿ ನೋಟಿಸ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಭಾಗ-1**

1) ಗುತ್ತಿಗೆದಾರರು ತಮ್ಮ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳಕಾಣಿಸಿದ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

(ಅ) 2004-05ರ ಸಾಲಿನಿಂದ 5 ವರ್ಷದೊಳಗೆ ಹಿಂದಕ್ಕೆ ಇಂತಹದೇ ಒಂದು ಕಾಮಗಾರಿಯನ್ನು (ಬ್ಯಾರೇಜ್-ಕಂ- ಬಿಡ್ಜ್) ಟೆಂಡರ್ ಅವಧಿಯೊಳಗೆ ಪೂರ್ಣಗೊಳಿಸಿರಬೇಕು. ಪೂರ್ತಿಗೊಳಿಸಿದ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ದೃಢೀಕರಣ ಪತ್ರ ಸಲ್ಲಿಸುವುದು. ವರ್ಷ 2004-05 ನೇ ಸಾಲಿನ ದರಗಳ ಮಟ್ಟಕ್ಕೆ ಹೋಲಿಸಿದಾಗ ಕನಿಷ್ಟ ರೂ. 1124.00 ಲಕ್ಷಗಳ (ಒಂದು ಸಾವಿರ ಒಂದು ನೂರಾ ಇಪ್ಪತ್ನಾಲ್ಕು ಲಕ್ಷಗಳು ಮಾತ್ರ) ಆರ್ಥಿಕ ವಾರ್ಷಿಕ ವಹಿವಾಟು ಮಾಡಿರಬೇಕು. ವರ್ಷ 2004-05ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಪ್ರತಿವರ್ಷಕ್ಕೆ ಶೇಕಡಾ 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.

(ಬ) ಪ್ರಮುಖ ಗುತ್ತಿಗೆದಾರರೆಂದು ಕನಿಷ್ಟ ಇಂತಹದೇ ಒಂದು ಕಾಮಗಾರಿ (ಶೇಕಡಾ 90 ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ ಮತ್ತು ಕಾಂಕ್ರೀಟ್ ಕೆಲಸಗಳನ್ನು ವರ್ಷ 2004-05ನೇ ಸಾಲಿನ ದರಗಳ ಮಟ್ಟಕ್ಕೆ)

(ಕ) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಟ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | | |
|---|---|---|
| (1) | ಅಗೆತದ ಕೆಲಸ | 36000.00 ಘ.ಮೀ. |
| (2) | ಸಿಮೆಂಟ್ ಕಾಂಕ್ರೀಟ ಕೆಲಸ | 25000.00 ಘ.ಮೀ. |
| (3) | ಉಕ್ಕಿನ (ಸ್ಟೀಲ್) ಗೇಟುಗಳನ್ನು ರಚಿಸುವುದು ಮತ್ತು ಅಳವಡಿಸುವುದು | 110.00 ಮೆಟ್ರಿಕ್ ಟನ್. |
| (4) | ಉಕ್ಕಿನ (ಸ್ಟೀಲ್) | 150.00 ಮೆಟ್ರಿಕ್ ಟನ್. |

2) ಅರ್ಜಿದಾರರು ಪ್ರದರ್ಶಿಸುವುದು.

(ಅ) ಮುಖ್ಯವಾಗಿ ಹಾಗೂ ಮಹತ್ವದಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು (ಸ್ವಂತ ಅಥವಾ ಲೀಜ) ಹೊಂದಿರಬೇಕು. ಲೀಜ ಆಗಿದ್ದಲ್ಲಿ ಜನರಲ್ ಪವರ್ ಆಫ್ ಅಟಾರ್ನಿ (G.P.A.) ಮೂಲ ದಾಖಲಾತಿ ಒದಗಿಸುವುದು.

| | | |
|---|---|---|
| (1) | ಎಕ್ಸ್‌ವೇಟರ್/ ಪೋಕ್ಲೆನ (0.90 ಘ.ಮೀ. ಸಾಮರ್ಥ್ಯ) | 2 ನಂ. |
| (2) | ಲಾರಿಗಳು/ ಟಿಪ್ಪರ್‌ಗಳು | 8 ನಂ. |
| (3) | ಕಾಂಪ್ರೆಸ್ಸರ/ ವ್ಯಾಗನ್ ಡ್ರಿಲ್ಲರ | 2 ನಂ. |
| (4) | ಕಾಂಕ್ರೀಟ್ ಮೆಶಿನ್ ಮಿಕ್ಸರ್ (10/7 ಘ.ಫೀಟ್ ಸಾಮರ್ಥ್ಯ) | 6 ನಂ. |
| (5) | ವೈಬ್ರೇಟರ್ | 10 ನಂ. |
| (6) | ಪಂಪ್‌ಸೆಟ್ (5 ಹೆಚ್.ಪಿ.) | 4 ನಂ. |
| (7) | ಪಂಪ್‌ಸೆಟ್ (10 ಹೆಚ್.ಪಿ.) | 4 ನಂ. |
| (8) | ಸೆಂಟ್ರಿಂಗ್ ಮೆಟೇರಿಯಲ್ಸ್ (ಕಾಂಕ್ರೀಟ್ ಕೆಲಸ) | 1600.00 ಘ.ಮೀ. ಪ್ರತಿ ದಿನಕ್ಕೆ. |

(ಬ) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರು ಹೊಂದಿರಬೇಕು.

(ಕ) ಋಣ ವಿಮೋಚಿಸುವ ಸಾಲ ಸೌಲಭ್ಯಕ್ಕಾಗಿ ರೂ. 200.00 ಲಕ್ಷಕ್ಕೂ ಕಡಿಮೆ ಇಲ್ಲದ ಬ್ಯಾಂಕಿನಿಂದ ಸಾಲವನ್ನು ಕಾಮಗಾರಿಗೆ ಪೂರೈಸುವಲ್ಲಿ ಸಹಾಯ ಒದಗಿಸುವಂತಿರಬೇಕು.

3) ಗುತ್ತಿಗೆದಾರರು ಕಾಮಗಾರಿಗೆ ಪೂರೈಸಲು ಸಾಕಷ್ಟು ಮಾನವ ಶಕ್ತಿ ಹೊಂದಿರುವ ಬಗ್ಗೆ ದೃಢೀಕರಣ ಪತ್ರ ಸಲ್ಲಿಸುವುದು.

4) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಕೆ ಮಾಡಬೇಕು.

5) ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ದಾಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡತಕ್ಕದ್ದು. ದಸ್ತಾವೇಜುಗಳ ಮೇಲೆ ಗುತ್ತಿಗೆದಾರರಿಂದ ದೃಢೀಕರಿಸಿ ಸಹಿ ಮಾಡದಿದ್ದಲ್ಲಿ ಅಂತಹ ದಸ್ತಾವೇಜುಗಳನ್ನು ತಾಂತ್ರಿಕ ಮೌಲ್ಯ ಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ.

**ಆರ್ಥಿಕ ಬಿಡ್ ಭಾಗ-2**

ಇದರಲ್ಲಿ 2 ಭಾಗಗಳಿದ್ದು, ಭಾಗ-1 (ಭಾಗ-2)ರಲ್ಲಿ ಆರ್ಥಿಕ ಬಿಡ್ ಇದ್ದ ಗುತ್ತಿಗೆದಾರರು ಐಟಂವಾರು ದರಗಳನ್ನು ಗುತ್ತಿಗೆಗೆ ಇಟ್ಟ ವಿವರಣೆಯ ಪ್ರಕಾರ ಶೆಡ್ಯೂಲ್ 'ಎ' ಮತ್ತು ಶೆಡ್ಯೂಲ್ 'ಬಿ' ಆಧಾರದ ಮೇಲೆ ನಮೂದಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಮಾಡುವುದು ಅಥವಾ ತಮ್ಮದೇ ಆದ ನಿಬಂಧನೆಗಳನ್ನು ಆರ್ಥಿಕ ಬಿಡ್ಡಿನ ಭಾಗ-1ರಲ್ಲಿ ಮಾಡತಕ್ಕದ್ದಲ್ಲ. ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್ ಭಾಗ-2 ಮಾತ್ರ ನಮೂದಿಸಿದ ದಿನಾಂಕ ದಂದು ತೆರೆಯಲಾಗುವುದು.

1) ಅಂಚೆ/ ಕೋರಿಯರ್ ಮೂಲಕ ಟೆಂಡರ್ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.

2) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕವೆಂದು ಪರಿಗಣಿಸುವುದು.

3) ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ್ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣವನ್ನು ನೀಡದೆ ತಿರಸ್ಕಸಿರುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

4) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯ ನಿರ್ವಾಹಕ ಅಭಿಯಂತರು ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಕಛೇರಿಯ ನೋಟಿಸ್ ಫಲಕದಲ್ಲಿ ಪ್ರಕಟಿಸಲಾಗುವುದು/ ತಿಳಿಸಲಾಗುವುದು.

5) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶಃ ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆ ಅಧೀನಕ್ಕೆ ಸ್ವಾಧೀನತೆಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತಃ ಸಂಧಾನದ ಮೂಲಕ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕಾಮಗಾರಿ ಪ್ರಾರಂಭಿಸಬೇಕು. ಭೂಸ್ವಾಧೀನ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ ಎಂಬುವುದು ಗಮನಿಸತಕ್ಕದ್ದು.

6) ಟೆಂಡರ್ ಡಾಕ್ಯೂಮೆಂಟಿನ ಭಾಗ-2ರ ಸೆಕ್ಷನ್-1ರಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳು ತಿರಸ್ಕರಿಸಲಾಗುವುದು.

7) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಪ್ರಕಾಶ ಶ್ರೀಹರಿ ಬಿ.**
ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ.

ಪಿ.ಆರ್. 145

## ಕರ್ನಾಟಕ ವಿಧಾನ ಸಭೆ ಸಚಿವಾಲಯ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಕವಿಸ/ 13/ ಗ್ರಂ/ 99-2004, ದಿನಾಂಕ: 15ನೇ ಮಾರ್ಚ್, 2005**

ಕರ್ನಾಟಕ ವಿಧಾನ ಸಭೆ ಸಚಿವಾಲಯದ ವಿವಿಧ ಶಾಖೆಗಳಲ್ಲಿ ಈ ಕೆಳಕಂಡ ದಿನಪತ್ರಿಕೆ/ ನಿಯತಕಾಲಿಕೆಗಳನ್ನು ಖರೀದಿಸಲು ಉದ್ದೇಶಿಸಲಾಗಿದೆ. ಈ ಸಂಬಂಧದಲ್ಲಿ ಮಾರಾಟಗಾರರಿಂದ ಖರೀದಿಸುವ ಸಲುವಾಗಿ ದಿನಪತ್ರಿಕೆ/ ನಿಯತಕಾಲಿಕೆಗಳನ್ನು ಸರಬರಾಜಿಗಾಗಿ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಇಚ್ಛೆಯುಳ್ಳ ಟೆಂಡರ್‌ದಾರರು, ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ (ಲೆಕ್ಕಪತ್ರ) ಕೊಠಡಿ ಸಂಖ್ಯೆ: 129, ಮೊದಲನೇ ಮಹಡಿ, ವಿಧಾನ ಸೌಧ ಇಲ್ಲಿ (ಕಛೇರಿ ವೇಳೆಯಲ್ಲಿ) 100+ ಶೇ.8ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀದಿಯನ್ನು ಪಡೆದು ಆನಂತರ ಟೆಂಡರ್ ನಮೂನೆಯನ್ನು ಉಪ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭಾ ಸಚಿವಾಲಯ, ಕೊಠಡಿ ಸಂಖ್ಯೆ: 146ಎ, ಮೊದಲನೇ ಮಹಡಿ, ವಿಧಾನ ಸೌಧ, ಬೆಂಗಳೂರು-1, ಇಲ್ಲಿ ರಶೀದಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ: 24.03.2005 ರಂದು ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 24.03.2005 ರಂದು ಮಧ್ಯಾಹ್ನ 4.00 ಗಂಟೆ ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಕೊಠಡಿ ಸಂಖ್ಯೆ: 121, ವಿಧಾನ ಸೌಧ, ಬೆಂಗಳೂರು-560 001, ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 24.03.2005 ರಂದು ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಸೆಕ್ಯೂರಿಟಿ ಡಿಪಾಜಿಟ್ ರೂ.5,200/- ಮತ್ತು ಇ.ಎಂ.ಡಿ. ರೂ.2,340/- ಗಳನ್ನು ಕಾರ್ಯದರ್ಶಿ, ವಿಧಾನ ಸಭೆ ಸಚಿವಾಲಯ, ವಿಧಾನ ಸೌಧ, ಬೆಂಗಳೂರು-560 001, ಇವರಿಗೆ ಸಂಭೋದಿಸಿ ಟೆಂಡರಿನ ಜೊತೆಗೆ ಲಗತ್ತಿಸತಕ್ಕದ್ದು. ಸೆಕ್ಯೂರಿಟಿ ಡಿಪಾಜಿಟ್ ಮತ್ತು ಇ.ಎಂ.ಡಿ.ಯನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
4. ಇನ್ನು ಹೆಚ್ಚಿನ ವಿವರಗಳಿಗೆ ಉಪ ಕಾರ್ಯದರ್ಶಿ, ಗ್ರಂಥಾಲಯ, ಕರ್ನಾಟಕ ವಿಧಾನ ಸಭೆ, ಸಚಿವಾಲಯ, ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22383821 ರಲ್ಲಿ ಸಂಪರ್ಕಿಸಬಹುದು.

**ಎಸ್. ಬಸವರಾಜ**
ಉಪ ಕಾರ್ಯದರ್ಶಿ (ಗ್ರಂಥಾಲಯ)
ಕರ್ನಾಟಕ ವಿಧಾನ ಸಭೆ ಸಚಿವಾಲಯ.

ಪಿ.ಆರ್.143

## ನಮೂನೆ-1

## 9ನೇ ನಿಯಮ ನೋಡಿ

## ಉದ್ಯೋಗ ಮತ್ತು ತರಬೇತಿ ಇಲಾಖೆ, ಕೈಗಾರಿಕಾ ತರಬೇತಿ ಸಂಸ್ಥೆ, ಹೊನ್ನಾವರ

ಉದ್ಯೋಗ ಮತ್ತು ತರಬೇತಿ ಇಲಾಖೆಯ, ಕೈಗಾರಿಕಾ ತರಬೇತಿ ಸಂಸ್ಥೆಯ ಕಾರ್ಯಾಲಯದದಲ್ಲಿ ಕೆಲಸ ಮಾಡುತ್ತಿರುವ ಶ್ರೀ ಪರಮೇಶ್ವರ ಹನುಮಂತ ಉಪ್ಪಾರ ಇವರ ಹೆಸರನ್ನು ಪರಮೇಶ್ವರ ಹನುಮಂತ ಶಿವರಂಜನೀಕರ್ ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

**ಬಿ. ರವೀಂದ್ರನಾಥ್**
ಜಂಟಿ ನಿರ್ದೇಶಕರು ತರಬೇತಿ (ಆಡಳಿತ),
ಉದ್ಯೋಗ ಮತ್ತು ತರಬೇತಿ.

ಪಿ.ಡಿ..44

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 7 ಡಿಟಿಎನ್ 2005, ಬೆಂಗಳೂರು, ದಿನಾಂಕ: 5ನೇ ಮಾರ್ಚ್, 2005**

ಸಚಿವರುಗಳ ಅಧಿಕೃತ ನಿವಾಸ ಮತ್ತು ಕಛೇರಿಗಳಲ್ಲಿರುವ ಈ ಕೆಳಕಂಡ ಮಾದರಿಯ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಗೆ ಒಳಪಡಿಸಲು ಸರ್ಕಾರವು ಉದ್ದೇಶಿಸಿದೆ. ಈ ಸಂಬಂಧ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ವಾರ್ಷಿಕ ಸೇವಾ ನಿರ್ವಹಣಾ ಅವಧಿಯು ಆದೇಶ ಹೊರಡಿಸುವ ದಿನಾಂಕದಿಂದ ಒಂದು ವರ್ಷಕ್ಕೆ ಇರುತ್ತದೆ.

| ಕ್ರಮ ಸಂಖ್ಯೆ | ಮಾದರಿ | ಒಟ್ಟು ಎಕ್ಸ್‌ಟೆನ್‌ಷನ್‌ಗಳು | ಒಟ್ಟು ಸಂಪರ್ಕ ವ್ಯವಸ್ಥೆ ಸಂಖ್ಯೆ |
|---|---|---|---|
| 1 | 2 | 3 | 4 |
| 1. | ನಿಟ್‌ಸುಕೋ ಎನ್‌ಕೇ ನೈಸ್ 32-ಐ ಸೀರಿಸ್ ಡಿಜಿಟಲ್ ಕೀ ಟೆಲಿಫೋನ್ ಸಿಸ್ಟಂ ಮತ್ತು 14 ಡಿಜಿಟಲ್ ಡಿಸ್‌ಪ್ಲೇ ಕೆಟಿಎನ್ ಉಪಕರಣ. | 20 ಲೈನ್ಸ್ (14+6) | 1 No. |
| 2. | ನಿಟ್‌ಸುಕೋ ಎನ್‌ಕೇ ನೈಸ್ 32-ಐ ಸೀರಿಸ್ ಡಿಜಿಟಲ್ ಕೀ ಟೆಲಿಫೋನ್ ಸಿಸ್ಟಂ ಮತ್ತು 18 ಡಿಜಿಟಲ್ ಡಿಸ್‌ಪ್ಲೇ ಕೆಟಿಎನ್ ಉಪಕರಣ. | 18 ಲೈನ್ಸ್ | 1 No. |
| 3. | ನಿಟ್‌ಸುಕೋ ಎನ್‌ಕೇ ಟಿಎಕ್ಸ್ 412 ಕೀ ಟೆಲಿಫೋನ್ ಸಿಸ್ಟಂ. | 10 ಲೈನ್ಸ್ | 1 No. |
| 4. | ಮೆಲ್ಟ್ರಾನ್ ಕೀ ಟೆಲಿಫೋನ್ | 8 ಲೈನ್ಸ್ (4+4) | 3 No. |
| 5. | ಪ್ಯಾನಾಸೋನಿಕ್ ಕೆಎಕ್ಸ್ ಟಿಎ:308 ಮಾದರಿ | 4 ಲೈನ್ಸ್ (3+1) | 14 No. |
| 6. | ಪ್ಯಾನಾಸೋನಿಕ್ ಕೆಎಕ್ಸ್ ಟಿಎ 308: ಬಿಎಕ್ಸ್ | 8 ಲೈನ್ಸ್ | 1 No. |
| 7. | ಪ್ಯಾನಾಸೋನಿಕ್ ಕೆಎಕ್ಸ್ ಟಿಎ:308 | 8 ಲೈನ್ಸ್ (5+3) | 2 No. |
| 8. | ಪ್ಯಾನಾಸೋನಿಕ್ ಕೆಎಕ್ಸ್ ಟಿಡಿ:816 | 16 ಲೈನ್ಸ್ (8+6) | 1 No. |
| 9. | ಮ್ಯಾಟ್ರಿಕ್ಸ್ ಇಪಿಎಬಿಎಕ್ಸ್ 308 | 8 ಲೈನ್ಸ್ | 1 No. |

**ಟೆಂಡರ್‌ನ ಷರತ್ತುಗಳು ಈ ಕೆಳಕಂಡಂತಿವೆ:**

1. ಮೊಹರು ಮಾಡಿರುವ ಟೆಂಡರ್‌ಗಳ ಲಕೋಟೆಯ ಮೇಲೆ "ಕೀ ಟೆಲಿಫೋನ್/ ಇಪಿಎಬಿಎಕ್ಸ್ ಸಂಪರ್ಕ ವ್ಯವಸ್ಥೆಯ ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
2. ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಲಾಗುವುದು.
3. ದರಪಟ್ಟಿ ನೀಡುವ ಸಂಸ್ಥೆಗಳು ಈ ಮೇಲ್ಕಂಡ ಉಪಕರಣಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
4. ವಿಸ್ತಾರವಾದ ವಾರ್ಷಿಕ ನಿರ್ವಹಣೆಗೆ (ಬಿಡಿ ಭಾಗಗಳ ವೆಚ್ಚವು ಸೇರಿದಂತೆ) ದರ ನಮೂದಿಸತಕ್ಕದ್ದು.
5. ಎಲ್ಲಾ ಸಂಪರ್ಕ ವ್ಯವಸ್ಥೆಗಳಿಗೂ **ಒಟ್ಟಾಗಿ ಟೆಂಡರ್** ಸಲ್ಲಿಸಬಹುದು. ಅಥವಾ ಪ್ಯಾನಾಸೋನಿಕ್ ಸಂಪರ್ಕ ವ್ಯವಸ್ಥೆಗೆ ಮಾತ್ರ ಟೆಂಡರ್ ಸಲ್ಲಿಸಬಹುದು. ಅದೇ ರೀತಿ "ನಿಟ್‌ಸುಕೋ" ಮತ್ತು "ಮೆಲ್ಟ್ರಾನ್" ಸಂಪರ್ಕ ವ್ಯವಸ್ಥೆಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬಹುದಾಗಿದೆ.
6. ದೂರು ಬಂದಾಗ ದುರಸ್ಥಿಪಡಿಸುವುದಲ್ಲದೆ, ಕನಿಷ್ಠ ತಿಂಗಳಿಗೊಮ್ಮೆ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (ಪ್ರಿವೆಂಟಿವ್ ಮೆಂಟೇನೆನ್ಸ್) ಮಾಡಿಸತಕ್ಕದ್ದು.
7. ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ತೃಪ್ತಿಕರವಾಗಿ ಸರ್ವೀಸ್ ಮಾಡಿದ ನಂತರ ಪ್ರತಿ 6 ತಿಂಗಳಿಗೊಮ್ಮೆ 2 ಕಂತುಗಳಲ್ಲಿ ವಾರ್ಷಿಕ ಸೇವಾ ನಿರ್ವಹಣಾ ಮೊತ್ತವನ್ನು ಸಂದಾಯ ಮಾಡಲಾಗುವುದು.
8. ದರಪಟ್ಟಿಯೊಂದಿಗೆ ಠೇವಣಿ (ಇ.ಎಂ.ಡಿ.) ಹಣ ರೂ. 15,000-00ಕ್ಕೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-1, ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು. ರೂ. 15,000-00ಗಳ ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
9. ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
10. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ವಾರ್ಷಿಕ ಅವಧಿ ಮುಗಿದ ನಂತರ ಅವರ ಕಾರ್ಯ ನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ, ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಾಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
11. ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: **21.03.2005 ರಂದು ಮಧ್ಯಾಹ್ನ 3-00** ಗಂಟೆಯ ಒಳಗೆ ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು-1, ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
12. ಯಾವುದೇ ಕಾರಣಗಳನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

13. ಟೆಂಡರ್‌ಗಳನ್ನು ಉಪ ಕಾರ್ಯದರ್ಶಿಯವರ ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು, ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 21.03.2005ರ ಮಧ್ಯಾಹ್ನ 4.00 ಗಂಟೆಗೆ ತೆರೆಯಲಾಗುವುದು.

**ಹೆಚ್.ಕೆ. ರವಿಮೂರ್ತಿ**

ಪಿ.ಆರ್.144

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಪೊಲೀಸ್ ಅಧೀಕ್ಷಕರವರ ಕಛೇರಿ, ಬೆರಳು ಮುದ್ರೆ ಸಂಗ್ರಹಾಲಯ, 5ನೇ ಮಹಡಿ, ಕೆ.ಹೆಚ್.ಬಿ. ಕಟ್ಟಡ, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಎಂಟಿ/19/ಬೆಮುಸಂ/2004, ದಿನಾಂಕ: 11ನೇ ಮಾರ್ಚ್, 2005**

**ವಿಷಯ :** ಈ ಘಟಕದ ನಿರುಪಯುಕ್ತಗೊಳಿಸಿದ ವಾಹನಗಳ ಸಂಖ್ಯೆ: ಸಿಎಇ 9789 ಅಂಬಾಸಿಡರ್ ಕಾರು ಮತ್ತು ಎಂಇಓ 2234 ಮಹೇಂದ್ರ ಜೀಪು ಇವುಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ-6/ ಟಿಸಿಇ/ 87, ದಿನಾಂಕ: 15.12.97.
2. ಪ್ರಧಾನ ಕಛೇರಿ, ಬೆಂಗಳೂರು ರವರ ಪತ್ರದ ಸಂಖ್ಯೆ: ವಾಸಾ/ (1) 27/2004-05, ದಿನಾಂಕ: 12.07.2004.
3. ಪ್ರಧಾನ ಕಛೇರಿ, ಬೆಂಗಳೂರುರವರ ಪತ್ರದ ಸಂಖ್ಯೆ: ವಾಸಾ/ (1)27/2004-05 ದಿನಾಂಕ: 03.03.2005.

ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಈ ಕಛೇರಿಯ ವಾಹನಗಳ ಸಂಖ್ಯೆ: ಸಿಎಇ 9789 ಅಂಬಾಸಿಡರ್ ಕಾರು ಮತ್ತು ಎಂಇಓ 2234 ಜೀಪು ಈ ವಾಹನಗಳನ್ನು ನಿರುಪಯುಕ್ತ ವಾಹನಗಳೆಂದು ಘೋಷಿಸಲಾಗಿದ್ದು, ಸದರಿ ವಾಹನಗಳನ್ನು ದಿನಾಂಕ: 30.04.2005ರಂದು ಬೆಳಿಗ್ಗೆ 10.30 ಗಂಟೆಗೆ ಎಫ್.ಪಿ.ಬಿ. ಮಡಿವಾಳ, ಬೆಂಗಳೂರು, ಇಲ್ಲಿ ಸಾರ್ವಜನಿಕರ ಸಮಕ್ಷಮ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ, ವಾಹನಗಳನ್ನು ಖರೀದಿಸಬಹುದಾಗಿರುತ್ತದೆ.

**ಹರಾಜಿನ ವಾಹನಗಳ ವಿವರಗಳು**

(1) ಸಿಎಇ 9789 ಅಂಬಾಸಿಡರ್ ಕಾರು ಮಾಡಲ್ 1981
(2) ಎಂಇಓ 2234 ಮಹೇಂದ್ರ ಜೀಪು ಮಾಡಲ್ 1973

ಈ ಮೇಲ್ಕಂಡ ವಾಹನಗಳನ್ನು ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್/ ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಶೀಲ್ಡ್ ಕವರ್) ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ಪೊಲೀಸ್ ವಾಹನದ ಖರೀದಿ ಬಗ್ಗೆ ಎಂದು ನಮೂದಿಸಬೇಕು.
2. ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರುದಾರರು ಪೂರ್ಣ ಸಹಿ ಮಾಡತಕ್ಕದ್ದು.
3. ಪ್ರತಿಯೊಬ್ಬ ಟೆಂಡರ್‌ದಾರರು/ ಬಿಡ್‌ದಾರರು ಪ್ರತಿ ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ 2,500-00 (ಎರಡು ಸಾವಿರದ ಐನೂರು ರೂ. ಮಾತ್ರ) ನಗದು/ ಡಿ.ಡಿ. ರೂಪದಲ್ಲಿ ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಇವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು, ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ದಾರರು ಟೆಂಡರ್‌ಗಳನ್ನು ದಿನಾಂಕ: 28.04.2005ರಂದು ಸಂಜೆ 5.00 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳೂ ಬಹಿರಂಗ ಹರಾಜನ್ನು ನಡೆಸುವರು, ಠೇವಣಿ ತುಂಬಿದ ಟೆಂಡರ್/ ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗ ಪಡಿಸುವುದು ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್/ ಸವಾಲುದಾರರು ವಾಹನದ ಒಟ್ಟು ಬೆಲೆಯ 25 ಶೇಕಡ ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು. ಸದರಿ ವಾಹನದ ಅತಿ ಹೆಚ್ಚಿನ ಟೆಂಡರ್/ ಸವಾಲಿನ ಮೊತ್ತವನ್ನು ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಶೇಕಡ 75ರಷ್ಟು ಹಣ ಮತ್ತು ತೆರಿಗೆಯನ್ನು ಪಾವತಿ ಮಾಡಿ ಒಂದು ತಿಂಗಳ ಒಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು. ತಪ್ಪಿದರೆ ಮುಂಗಡವಾಗಿ ಕಟ್ಟಿದ ಶೇಕಡ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಪೂರ್ಣ ಮೊತ್ತವನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ರವರ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು, ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.

11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್/ ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸತಕ್ಕದ್ದು.

12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.

13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್/ ಸವಾಲುದಾರರು ಮುಂಗಡವಾಗಿ ಕಟ್ಟಲಾದ (ಇ.ಎಂ.ಡಿ.) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.

14. ಹರಾಜಿನ ಯಾವುದೇ ಟೆಂಡರ್/ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಪಡಿಸುವ/ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.

15. ಮೇಲ್ಕಂಡ ಟೆಂಡರ್/ ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.

16. ಹರಾಜು ಮಾಡಲಿರುವ ನಿರುಪಯುಕ್ತ ವಾಹನವನ್ನು ಎಫ್.ಪಿ.ಬಿ. ಮಡಿವಾಳ, ಬೆಂಗಳೂರು ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ವಾಹನ ವಿಭಾಗ ರವರನ್ನು ಸಂಪರ್ಕಿಸಿ, ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಕೊಳ್ಳಬಹುದು.

17. ಟೆಂಡರ್ ಫಾರಂಗಳನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಮಡಿವಾಳ, ಬೆಂಗಳೂರುರವರ ಕಛೇರಿಯಿಂದ ಬೆಳಿಗ್ಗೆ 10.00 ಗಂಟೆಯಿಂದ 17.30 ಗಂಟೆಯವರೆಗೆ ದಿನಾಂಕ: 27.04.2005ರವರೆಗೆ ಪಡೆದು ಸಲ್ಲಿಸಬಹುದು.

**ಎಂ. ನರಸಿಂಹಯ್ಯ**

ಪಿ.ಆರ್.141

ಪೊಲೀಸ್ ಅಧೀಕ್ಷಕರು,

ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು.

**IN THE COURT OF THE IV ADDL. CITY CIVIL JUDGE: MAYOHALL, BANGALORE**

**P.N. MAYOHALL**

**P & S.C. NO.15046/2004, H.G. 25th May, 2005**

| **PETITIONER** | | **RESPONDENT** |
|---|---|---|
| 1. Mr. K. Abdul Jaleel, aged about 78 years, S/o Late Mr. K. Abdul Rahman.<br>2. Mrs. K.J. Musarrat Jehan, aged about 52 years W/o Mr. T. Mohd. Hidayathulla<br>3. Mr. K.J. Javeed Ahmed aged about 47 years S/o K. Abdul Jaleel.<br>4. Mr. K.J. Shakeel Ahmed aged about 45 years S/o K. Abdul Jaleel,<br>5. Mr. K.J. Khalid Ahmed aged about 39 years S/o K. Abdul Jaleel.<br>All are residing at No.24/1, 1st Floor, Godown Street, Bangalore-52. | **V/s** | - NIL - |

**PUBLIC NOTICE**

Notice is hereby given that a petition have been made to this court under section 372 of the Indian Succession Act, for grant of Succession Certificate of the deceased **Mrs. P.M. MEHRUNISSA** W/o K. Abdul Jaleel who died on 30.11.2001 at Bangalore.

Be it known that no caveat has been entered and the said petition is posted for hearing on 25.05.2005, All person's claiming to have any interest in the Assets of the deceased may come and see the proceeding before grant of Succession Certificate.

Given under my hand and the seal of the Court, this the 23rd December 2004.

By Order of the Court,

PD-46

Asst. Registrar,

City Civil Court, Mayohall Unit, Bangalore.

**ಕರ್ನಾಟಕ ಲೋಕೋಪಯೋಗಿ ಇಲಾಖೆ, ನಂ.1ನೇ ಕಟ್ಟಡಗಳ ವಿಭಾಗ, ಬೆಂಗಳೂರು**

**ಟೆಂಡರ್ ವಿಸ್ತರಣಾ ಪ್ರಕಟಣೆ ಸಂಖ್ಯೆ: ಕಾಅ: ಕವಿ-1: ಡಿ-1:296:2004-2005 ದಿನಾಂಕ: 16ನೇ ಮಾರ್ಚ್, 2005**

ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ: ಕಾಅ: ಕವಿ-1: ಡಿ-1-224-2004-2005 ದಿನಾಂಕ: 17.01.2005 ಹಾಗೂ ಸಂಖ್ಯೆ:ಕಾಅ: ಕವಿ-1: ಡಿ-1-225-2004-2005 ದಿನಾಂಕ: 17.03.2005ರಲ್ಲಿ ನೀಡಲಾಗಿದ್ದ ಕಾಮಗಾರಿ ಟೆಂಡರ್‌ಗಾಗಿ ಅರ್ಜಿಗಳನ್ನು ಸ್ವೀಕರಿಸುವ, ಟೆಂಡರ್ ಫಾರಂಗಳನ್ನು ಕೊಡುವ ಮತ್ತು ಸ್ವೀಕರಿಸುವ ದಿನಾಂಕಗಳನ್ನು ವಿಸ್ತರಿಸಿ ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ಕ್ರ. ಸಂ. | ಕಾಮಗಾರಿ | ಟೆಂಡರ್‌ಗಾಗಿ ಅರ್ಜಿಸ್ವೀಕರಿಸುವ ದಿನಾಂಕ | ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ | ಭರ್ತಿಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ |
|---|---|---|---|---|
| 1. | ಬೆಂಗಳೂರು ವಸಂತನಗರ ಮಿಲ್ಲರ್ ರಸ್ತೆ ಬಳಿ ದೇವರಾಜ್ ಅರಸ್ ಭವನ ನಿರ್ಮಾಣದ ಕಾಮಗಾರಿ | 11.04.2005 | 15.04.2005 | 23.04.2005 |

**ಸೂಚನೆ:** ಈಗಾಗಲೇ ನೀಡಿರುವ ಪ್ರಕಟಣೆಗಳಲ್ಲಿ ತಿಳಿಸಿರುವ ಇತರೆ ನಿಯಮಾವಳಿಗಳಲ್ಲಿ ಯಾವುದೇ ಬದಲಾವಣೆಯು ಇರುವುದಿಲ್ಲ.

ಕಾರ್ಯಪಾಲಕ ಅಭಿಯಂತರು,
ಪಿ.ಆರ್.152 ನಂ.1ನೇ ಕಟ್ಟಡಗಳ ವಿಭಾಗ, ಬೆಂಗಳೂರು.

**ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು**
**(ಇಲಾಖಾ ನೇಮಕಾತಿ ಕುರಿತು ಜಾಹೀರಾತುಗಳು ಸಮೂಹ 'ಸಿ' ಹುದ್ದೆಗಳ ನೇಮಕಾತಿ ಪ್ರಕಟಣೆಗಳು)**
**ಬ್ಯಾಕ್‌ಲಾಗ್ ಹುದ್ದೆಗಳು ಮಾತ್ರ**
**ಅಧಿಸೂಚನೆ ಸಂಖ್ಯೆ: ಸೈಕಪುಇ/ ಸಿಬ್ಬಂದಿ/ 10(ಸಿ)/ 2005 ದಿನಾಂಕ: 11ನೇ ಮಾರ್ಚ್, 2005**

ದಿನಾಂಕ 13ನೇ ಜನವರಿ 2005ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಸಮೂಹ 'ಸಿ' ಹುದ್ದೆಗಳ ನೇಮಕಾತಿ ಅಧಿಸೂಚನೆ ಸಂಖ್ಯೆ: ಸೈಕಪುಇ/ ಸಿಬ್ಬಂದಿ/ 10(ಸಿ)/ 2004 ದಿನಾಂಕ: 18ನೇ ಡಿಸೆಂಬರ್ 2004 ಮತ್ತು ಸೈಕಪುಇ/ ಸಿಬ್ಬಂದಿ/ 10(ಸಿ)/ 2004 ((i) ದಿನಾಂಕ 18ನೇ ಡಿಸೆಂಬರ್ 2004ರಲ್ಲಿ ಈ ಕೆಳಗಿನ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅರ್ಹ ಪರಿಶಿಷ್ಟ ಜಾತಿ ಮಾಜಿ ಸೈನಿಕ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿತ್ತು.

**ಬ್ಯಾಕ್‌ಲಾಗ್ ಹುದ್ದೆಗಳು (ಒಟ್ಟು 2 (ಎರಡು)**

(ಅ) ದ್ವಿತೀಯ ದರ್ಜೆ ಸಹಾಯಕರು (ವೇತನ ಶ್ರೇಣಿ ರೂ.3000-5450) (ಪರಿಶಿಷ್ಟ ಜಾತಿ 1 (ಒಂದು ಮಾತ್ರ)

(ಬ) ಮಿಲಿಟರಿ ಬಾಲಕ/ ಬಾಲಕಿಯರ ವಿದ್ಯಾರ್ಥಿ ನಿಲಯದ ಅಧೀಕ್ಷಕರು (ವೇತನ ಶ್ರೇಣಿ ರೂ.3000-5450) (ಪರಿಶಿಷ್ಟ ಜಾತಿ 1 (ಒಂದು ಮಾತ್ರ)

ಮೇಲಿನ ನೇಮಕಾತಿ ಪ್ರಕಟಣೆ ಉಲ್ಲೇಖಿಸಿ ಈ ಕೆಳಗಿನಂತೆ ಅರ್ಜಿಗಳು ನೇಮಕಾತಿ ಸಮಿತಿಗೆ ಸ್ವೀಕೃತವಾದವು:

| | | |
|---|---|---|
| (ಅ) | ದ್ವಿತೀಯ ದರ್ಜೆ ಸಹಾಯಕರು | 36 (ಪರಿಶಿಷ್ಟ ಜಾತಿ) |
| (ಬ) | ಮಿಲಿಟರಿ ಬಾಲಕ/ ಬಾಲಕಿಯರ ವಿದ್ಯಾರ್ಥಿ ನಿಲಯದ ಅಧೀಕ್ಷಕರು | 04 (ಪರಿಶಿಷ್ಟ ಜಾತಿ) |
| | **ಒಟ್ಟು** | 40 |

ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಹೊರಡಿಸಿದ ಇತ್ತೀಚಿನ ಅಧಿಸೂಚನೆ: ಪ್ರಕಟಣೆ ಸಂಖ್ಯೆ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ಹಾಗೂ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 01.06.2002 ಪ್ರಕಾರ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ, ಮೇಲಿನ ಸರ್ಕಾರಿ ಆದೇಶಗಳನುಸಾರ ಈ ಕೆಳಗಿನ ಅಭ್ಯರ್ಥಿಗಳು ಆಯ್ಕೆ ಆಗಿದ್ದಾರೆ ಮತ್ತು ಕಾಯ್ದಿರಿಸಲಾಗಿದೆ.

**ದ್ವಿತೀಯ ದರ್ಜೆ ಸಹಾಯಕರು**

**ಪಟ್ಟಿ 1 (ಒಂದನೇ)**

(ಅ) ಮಾಜಿ ನಾಯಕ ವಿಜಯ ಕುಮಾರ್ ಸಿ. — ಆಯ್ಕೆ ಮಾಡಲಾಗಿದೆ.
(ಬ) ಮಾಜಿ ಸಿಗ್ನಲ್ ಮ್ಯಾನ್ ಬಾಬು ಶೆಟ್ಟೆಪ್ಪ ಶಿವನಕರ — ಕಾಯ್ದಿರಿಸಲಾಗಿದೆ.

**ಎರಡನೇ ಹೆಚ್ಚುವರಿ ಪಟ್ಟಿ**

(ಅ) ಮಾಜಿ ಹವಾಲ್ದಾರ ಬಸವರಾಜ ಮಡಿವಾಳೆಪ್ಪ ಜೋಗೇರ — ಕಾಯ್ದಿರಿಸಲಾಗಿದೆ.
(ಬ) ಮಾಜಿ ನಾಯಕ ಪ್ರಲ್ಹಾದ ನೀಲಪ್ಪ ಮಂಕಾಳೆ — ಕಾಯ್ದಿರಿಸಲಾಗಿದೆ.

**ಮಿಲಿಟರಿ ಬಾಲಕ/ ಬಾಲಕಿಯರ ವಿದ್ಯಾರ್ಥಿ ನಿಲಯದ ಅಧೀಕ್ಷಕರು**

**ಪಟ್ಟಿ 1 (ಒಂದನೇ)**

(ಅ) ಮಾಜಿ ನಾಯಬ್ ಸುಬೇದಾರ ಮಧು ಲಮಾಣಿ — ಆಯ್ಕೆ ಮಾಡಲಾಗಿದೆ.
(ಬ) ಮಾಜಿ ನಾಯಬ್ ಸುಬೇದಾರ ಸದಾಶಿವ ಎಸ್ ದೊಡ್ಡಮನಿ — ಕಾಯ್ದಿರಿಸಲಾಗಿದೆ.

**ಎರಡನೇ ಹೆಚ್ಚುವರಿ ಪಟ್ಟಿ**

(ಅ) ಮಾಜಿ ನಾಯಬ್ ಸುಬೇದಾರ ಹೆಚ್.ಕೆ. ಮಧು — ಕಾಯ್ದಿರಿಸಲಾಗಿದೆ.
(ಬ) ಮಾಜಿ ಸುಬೇದಾರ ಶ್ರೀಶೈಲಪ್ಪ ಶಿದ್ದಪ್ಪ ಮಾದರ — ಕಾಯ್ದಿರಿಸಲಾಗಿದೆ.

ನಿರ್ದೇಶಕರು,
ಪಿ.ಆರ್.160 ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು-560 025.

**ಜಲ ಸಂಪನ್ಮೂಲ ಇಲಾಖೆ**
**ಟೆಂಡರ್ ತಿದ್ದುಪಡಿ ಪ್ರಕಟಣೆ 2004-05**
**ನಂ. ಕಾ.ಇ./ಬಿ.ಡಿ.ಎನ್. -4/ ಪಿ.ಬಿ. -4/ ಟೆಂಡರ್ ಪ್ರಕಟಣೆ 2004-05/ 5263, ದಿನಾಂಕ:17ನೇ ಮಾರ್ಚ್, 2005**

ಸಂಖ್ಯೆ: ಬಿಡಿಎನ್-4/ಪಿ.ಬಿ.-4/ ಟೆಂಡರ್ ಪ್ರಕಟಣೆ/ 2004-2005/4739, ದಿನಾಂಕ: 25ನೇ ಫೆಬ್ರವರಿ, 2005 ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: ಬಿಡಿಎನ್-4/ಪಿ.ಬಿ. -4/ ಟೆಂಡರ್ ಪ್ರಕಟಣೆ/ 2004-05/ 4739/ ದಿನಾಂಕ: 25.02.2005ರಲ್ಲಿ ಹೊರಡಿಸಿರುವ ಟೆಂಡರ್ ಪ್ರಕಟಣೆಯಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಲಾಗಿದೆ.

1. ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸಲು ಕೊನೆಯ ದಿನಾಂಕ: 17.05.05 ಸಂಜೆ 5.30 ಗಂಟೆಯವರೆಗೆ.
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 18.05.05.
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 19.05.05 ಸಂಜೆ 4.00 ಗಂಟೆಯವರೆಗೆ.

ಟೆಂಡರ್ ಪ್ರಕಟಣೆಯ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

**ಎ. ಮಲ್ಲೇಗೌಡ**
ಪಿ.ಆರ್.164 ಕಾರ್ಯಪಾಲಕ ಇಂಜಿನಿಯರ್, ನಂ.4
ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.